## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **793 (921)**
ಸದಸ್ಯರ ಹೆಸರು : ಡಾ॥ ವೈ. ಎ ನಾರಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20.09.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದೈಹಿಕ ಶಿಕ್ಷಣ ಶಿಕ್ಷಕರನ್ನು ಸಹ ಶಿಕ್ಷಕರೆಂದು ಪರಿಗಣಿಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ (ಮಾಹಿತಿ ನೀಡುವುದು) ಈ ಬಗ್ಗೆ ಸಚಿವ ಸಂಪುಟದಲ್ಲಿ ಮಂಡಿಸಿ ಅನುಮೋದನೆ ಪಡೆಯಲಾಗಿದೆಯೇ; | ಸರ್ಕಾರದ ಆದೇಶ ಸಂಖ್ಯೆ:ಇಡಿ 290 ಎಸ್‌ಎಲ್‌ಬಿ 2006, ದಿ:06/08/2007ರಲ್ಲಿ ಪ್ರೋ:ವೈದ್ಯನಾಥನ್ ವರದಿಗೆ ಅನುಮೋದನೆ ನೀಡಿದ್ದು, ಸದರಿ ವರದಿಯಲ್ಲಿನ 14 ಅಂಶಗಳ ಪೈಕಿ 13 ಅಂಶಗಳನ್ನು ಜಾರಿಗೊಳಿಸಲಾಗಿದ್ದು, ಉಳಿದ 14ನೇ ಅಂಶವಾದ ದೈಹಿಕ ಶಿಕ್ಷಣ ಶಿಕ್ಷಕರುಗಳ ಪದನಾಮವನ್ನು "ಸಹ ಶಿಕ್ಷಕರು" (ದೈಹಿಕ ಶಿಕ್ಷಣ) ಎಂದು ಪರಿಗಣಿಸಲು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಷ್ಕರಣೆ ಮಾಡುವ ಬಗ್ಗೆ ಇಲಾಖಾ ಮುಖ್ಯಸ್ಥರು ದಿನಾಂಕ:30/05/2018ರಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.<br><br>ಈ ಬಗ್ಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:24/05/2018ರಂದು ಹಾಗೂ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:23/10/2018ರಂದು ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯಲ್ಲಿ ಕರಡು ನಿಯಮಗಳಲ್ಲಿ ಕೆಲವೊಂದು ಅಂಶಗಳನ್ನು ಸೇರ್ಪಡೆಗೊಳಿಸಲು ಹಾಗೂ ಕೆಲವು ಅಂಶಗಳನ್ನು ಕೈಬಿಡಲು ನಿರ್ಣಯಿಸಿ, ಕರಡು ತಿದ್ದುಪಡಿ ನಿಯಮಗಳನ್ನು ಅನುಮೋದಿಸಿರುತ್ತಾರೆ.<br><br>ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣಾ ತಿದ್ದುಪಡಿ ನಿಯಮಗಳ ಕುರಿತಂತೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳ ಇಲಾಖೆಗಳೊಂದಿಗೆ ಸಮಾಲೋಚಿಸಲಾಗಿದ್ದು, ಆರ್ಥಿಕ ಇಲಾಖೆಯು ಕೆಲವು ಮಾಹಿತಿ ಒದಗಿಸುವಂತೆ ಕೋರಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗಳು ಕೆಲವು ಅಂಶಗಳ ಬಗ್ಗೆ ಸಲಹೆ / ಅಭಿಪ್ರಾಯ ನೀಡಿವೆ.<br><br>ಈ ಕುರಿತಂತೆ ದಿನಾಂಕ:17/06/2020ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ಇತರೆ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಲು ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ನೀಡಿರುವ ಸಲಹೆಗಳನ್ನು ಅಳವಡಿಸಿಕೊಂಡು ಪರಿಷ್ಕೃತ ಕರಡು ನಿಯಮಗಳನ್ನು ಸಿದ್ಧಪಡಿಸಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪರಿಶೋಧನೆಗೆ ಕಳುಹಿಸಲು ನಿರ್ಣಯಿಸಲಾಗಿದೆ. ಅದರಂತೆ, ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಿ, ಅಭಿಪ್ರಾಯ / ಸಹಮತಿಗಾಗಿ ಕಡತವನ್ನು ದಿನಾಂಕ: 16/02/2021ರಲ್ಲಿ ಶಿಕ್ಷಣ ಇಲಾಖೆಯಿಂದ ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದು, ಆರ್ಥಿಕ |

| | | |
|---|---|---|
| | | ಇಲಾಖೆಯಿಂದ. "ಸಾರ್ವಜನಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ವಿಷಯಕ್ಕೆ ಭಾಗ-1ರ ಕ್ರಮ ಸಂಖ್ಯೆ:8ರಲ್ಲಿನ ಪ್ರೌಢ ಶಾಲೆಯ ಮುಖ್ಯ ಶಿಕ್ಷಕರು / ಶಿಕ್ಷಕಿಯರು 88 ಹುದ್ದೆ ಮತ್ತು 304 ಹುದ್ದೆಗಳು ಹಾಗೂ ಭಾಗ-2ರಲ್ಲಿನ ಕ್ರಮ ಸಂಖ್ಯೆ:23 ಪ್ರೌಢ ಶಾಲಾ ಸಹ ಶಿಕ್ಷಕ / ಶಿಕ್ಷಕರ ಗ್ರೇಡ್-2ರ 1520 ಹುದ್ದೆಗಳು ಹಾಗೂ ಕ್ರಮ ಸಂಖ್ಯೆ:33ರ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್-1ರ 304 ಹುದ್ದೆಗಳು ಮತ್ತು ಭಾಗ-4ರ ಕ್ರಮ ಸಂಖ್ಯೆ: 49ರ ಲೆಕ್ಕ ಅಧೀಕ್ಷಕರು 34 ಹುದ್ದೆಗಳಿಗೆ ಸಂಬಂಧಿಸಿದಂತೆ. ಮಾಹಿತಿ / ಸ್ಪಷ್ಟೀಕರಣವನ್ನು ದಾಖಲೆಗಳೊಂದಿಗೆ ಒದಗಿಸುವಂತೆ ಮತ್ತು ಈ ಬಗ್ಗೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ತಿಳಿಸಿ ದಿನಾಂಕ:18/08/2021ರಂದು ಕಡತ ಹಿಂದಿರುಗಿಸಿರುತ್ತಾರೆ. ಈ ಸಂಬಂಧ. ಪರಿಶೀಲಿಸಿ . ಆರ್ಥಿಕ ಇಲಾಖೆಯಿಂದ ಕೋರಿರುವ ಮಾಹಿತಿಯನ್ನು ನೀಡಿ ಆರ್ಥಿಕ ಇಲಾಖೆಯ ಸಹಮತಿ / ಅಭಿಪ್ರಾಯ ಪಡೆದು ನಂತರ ಅವುಗಳನ್ನು ಪರಿಷ್ಕೃತ ಕರಡು ನಿಯಮದಲ್ಲಿ ಅಳವಡಿಸಿಕೊಂಡು ಕರಡು ನಿಯಮದ ಪರಿಶೋಧನೆಗಾಗಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಗೆ ಕಳುಹಿಸಲು ಕ್ರಮವಹಿಸಲಾಗುವುದು. ನಂತರ ಅಂತಿಮವಾಗಿ ಸಚಿವ ಸಂಪುಟದ ಅನುಮೋದನೆ ಪಡೆದು ಕರಡು ನಿಯಮಗಳನ್ನು ಪ್ರಕಟಿಸಿ ನಿಯಮಾನುಸಾರ ಅಂತಿಮಗೊಳಿಸಲಾಗುವುದು. |
| ಆ | ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಖಾಲಿ ಇರುವ ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳ ಭರ್ತಿಗೆ ಸರ್ಕಾರ ಕ್ರಮವಹಿಸಲಾಗಿದೆಯೇ, ಕ್ರಮವಹಿಸಿದ್ದಲ್ಲಿ, ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲಾಗುವುದು; (ಮಾಹಿತಿ ನೀಡುವುದು) | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ 957 ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳನ್ನು ಹಾಗೂ ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿಯಿರುವ 331 ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |
| ಇ | ಸರ್ಕಾರಿ ನೌಕರರ ಕ್ರೀಡಾ ಕೂಟಗಳಲ್ಲಿ ಭಾಗವಹಿಸಲು ವಂಚಿತರಾಗಿರುವ ದೈಹಿಕ ಶಿಕ್ಷಣ ಶಿಕ್ಷಕರಿಗೆ ಸರ್ಕರದ ವತಿಯಿಂದ ಕ್ರೀಡಾಕೂಟ ನಡೆಸಲು ಸರ್ಕಾರ ಕ್ರಮ ಕೈಗೊಂಡಿದೆಯೇ; | ರಾಜ್ಯ ಸರ್ಕಾರಿ ನೌಕರರ ಕ್ರೀಡಾ ಕೂಟದ ಕ್ರೀಡಾ ನಿಯಮಾವಳಿಗಳ ಕ್ರಮ ಸಂಖ್ಯೆ:4ರನ್ವಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಹಾಗೂ ಕಾಲೇಜುಗಳ ದೈಹಿಕ ಶಿಕ್ಷಕರು ಸದರಿ ಸ್ಪರ್ಧೆಯಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. |
| ಈ | ಕೈಗೊಂಡಿದ್ದಲ್ಲಿ, ಮಾಹಿತಿಯನ್ನು ನೀಡುವುದು? | ಪ್ರಶ್ನೆ ಉದ್ಭವಿಸುವುದಿಲ್ಲ |

**ಸಂಖ್ಯೆ: ಇಪಿ 78 ಎಲ್‌ಬಿಪಿ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು